ಎಂಬ ಪ್ರಕಟಣೆಯನ್ನು ದಿನಾಂಕ:28-01-02ರ ಕಂಠೀರವ ಕನ್ನಡ ದಿನಪತ್ರಿಕೆಯಲ್ಲಿ ಹಾಗೂ 28ನೇ ಫೆಬ್ರವರಿ 2002 ರ ಭಾಗ-3 ಪುಟ ಸಂಖ್ಯೆ:596ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಈ ಮಧ್ಯೆ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಉಡುಪಿಯವರಲ್ಲಿ ಪತ್ರವ್ಯವಹರಿಸಿ, ವಾಹನದ ಬಿ ವರದಿಯನ್ನು ಪಡೆದು ಪರಿಶೀಲಿಸಿದಾಗ, ಬಿ ವರದಿಯಲ್ಲಿ ಸಮೂದಿಸಿದ ಇಂಜಿನ್ ನಂ. ಹಾಗೂ ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದ ಇಂಜಿನ್ ನಂಬರ್‌ಗಳು ತಾಳೆ ಹೊಂದುತ್ತದೆ. ಹಾಗೂ ಸದರಿ ವಾಹನವು ಕೆ.ಎಸ್. ಅಹಮದ್ ಬಿನ್ ಹುಸೇನ್ ಸಾಹೇಬ್ ಶಹೀನ್ ಮಂಜಿಲ್, ವಿ.ಬಿ. ರೋಡ್, ಕ್ರೊದಶರ್ಮ ಅಂಚೆ ಉಡುಪಿ ತಾಲ್ಲೂಕು ಇವರ ಹೆಸರಿನಲ್ಲಿರುತ್ತದೆಂದು ತಿಳಿಸಿದನ್ವಯ ಈ ಪ್ರಾಧಿಕಾರದಿಂದ ದಿನಾಂಕ:21-02-03 ರಂದು ಕೆ.ಎಸ್. ಅಹಮದ್ ಇವರಿಗೆ ಕಾರಣ ಕೇಳುವ ನೋಟಿಸನ್ನು ಜಾರಿ ಮಾಡಿದ್ದು, ಅದಕ್ಕೆ ಉತ್ತರವನ್ನು ಸಹ ದಿನಾಂಕ:5-3-03ರ ಪತ್ರದಲ್ಲಿ ತಿಳಿಸಿರುತ್ತಾರೆ. ಸದರಿ ಪತ್ರದಲ್ಲಿ ವಾಹನವನ್ನು ದಿನಾಂಕ:22-10-99 ರಂದು ಶ್ರೀ ಅಬ್ದುಲ್ ರಜಾಕ್ ನ್ಯಾಯವಾದಿ, ಕೊಪ್ಪ ಇವರಿಗೆ ಮಾರಿರುತ್ತೇನೆಂದು ತಿಳಿಸಿರುವುದರಿಂದ, ಈ ಪ್ರಾಧಿಕಾರದಿಂದ ದಿನಾಂಕ:24-5-03 ರಂದು ಮತ್ತು 23-9-03 ರಂದು ಎರಡು ಕಾರಣ ಕೇಳುವ ಪತ್ರವನ್ನು ರಿಜಿಸ್ಟರ್ ಅಂಚೆ ಮುಖಾಂತರ ಕಳುಹಿಸಲಾಗಿತ್ತು. ಅನಂತರ ಅಬ್ದುಲ್ ರಜಾಕ್ ರವರು ತನ್ನ ಲಿಖಿತ ಹೇಳಿಕೆಯಲ್ಲಿ ಕೆಎ:20:ಎಂ:2873 ನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲು ತನ್ನದೇನು ತಕರಾರು ಇಲ್ಲವೆಂದು ಈ ಪ್ರಾಧಿಕಾರಕ್ಕೆ ಪತ್ರ ಬರೆದಿದ್ದು, ಅದು ದಿನಾಂಕ:9-12-03 ರಂದು ಸ್ವೀಕೃತವಾಗಿರುತ್ತದೆ.

ಮುಂದುವರಿದು ವಾಹನ ಮಾಲೀಕರ ಈ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನ ಎಲ್‌ಎಂಎಲ್ ವೆಸ್ಪಾ ಸ್ಕೂಟರ್ ಸಂಖ್ಯೆ:ಕೆಎ:20:ಹೆಚ್:2873 ನ್ನು ಸರ್ಕಾರದ ಪರ ಮುಟ್ಟುಗೋಲು ಹಾಕಿಕೊಳ್ಳಲು ತನ್ನದು ತಕರಾರು ಇಲ್ಲವೆಂದು ತಿಳಿಸಿರುವುದರಿಂದ, ಅಲ್ಲದೇ ವಾಹನದಲ್ಲಿ ದಿನಾಂಕ: 03-01-02 ರಂದು ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆ ಮಾಡುತ್ತಿದ್ದಾಗ, ಫಿರ್ಯಾದಿದಾರರು ಪತ್ತೆ ಹಚ್ಚಿ ಸ್ಥಳ ಮಹಜರ್‌ನೊಂದಿಗೆ ಅಕ್ರಮ ಶ್ರೀಗಂಧವನ್ನು ವಾಹನ ಸಮೇತವಾಗಿ ವಶಪಡಿಸಿಕೊಂಡು ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ. ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ ಹಾಗೂ ಫಿರ್ಯಾದಿದಾರರು ಒಪ್ಪಿಸಿದ ದಾಖಲಾತಿಯಿಂದ ಕಾನೂನು ಬಾಹಿರವಾಗಿ ಶ್ರೀಗಂಧವನ್ನು ಕೆಎ:20:ಹೆಚ್:2873 ರ ಎಲ್‌ಎಂಎಲ್ ವೆಸ್ಪಾ ಸ್ಕೂಟರ್‌ನಲ್ಲಿ ದಿನಾಂಕ: 03-01-02 ರಂದು ಸಾಗಾಣಿಕೆ ಮಾಡುತ್ತಿರುವುದು ಸಂಬಂಧಪಟ್ಟ ದಾಖಲೆಯಿಂದ ದೃಢಪಟ್ಟಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುವುದರಿಂದ ಈ ಆದೇಶ.

**ಆದೇಶ**

**ಸಂಖ್ಯೆ:ಎ1:71ಎ:ಅಮೊ:82:01-02, ದಿನಾಂಕ: 26ನೇ ಡಿಸೆಂಬರ್ 2003**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಕೆ. ಲೋಕನಾಥಶೆಟ್ಟಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯಕಾಯ್ದೆ 1963ರ ಸೆಕ್ಷನ್ 71ಎ ರಂತೆ ಪ್ರದತ್ತವಾದ ಅಧಿಕಾರದಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಎಲ್.ಎಂ.ಎಲ್. ವೆಸ್ಪಾ ಸ್ಕೂಟರ್ ನೊಂದಣಿ ಸಂಖ್ಯೆ:ಕೆಎ:20: ಹೆಚ್:2873 ಇಂಜಿನ್ ನಂ.ಇ 01 ಕ್ಯೂಬಿ 308984 ಛಾಸ್ಸಿ ಸಂಖ್ಯೆ:ಕಾಣಿಸುವುದಿಲ್ಲ. ಹಾಗೂ 10 ಕೆಜಿ ತೂಕದ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಾಹನ ಮತ್ತು ಶ್ರೀಗಂಧವನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡುವಂತೆ ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ:26-12-03 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದರೆ ಅದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ಈ ಆದೇಶವು ದಿನಾಂಕ:26-12-03 ರಂದು ಬೆರಳಚ್ಚು ಮಾಡಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿದ್ದೇನೆ.

**ಕೆ. ಲೋಕನಾಥಶೆಟ್ಟಿ**

ಪಿ.ಆರ್. 49

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರ ನ್ಯಾಯಾಲಯ, ಮಂಡ್ಯ ಉಪ ವಿಭಾಗ-2, ಮಂಡ್ಯ**

**ಪ್ರಕರಣ ಸಂಖ್ಯೆ:ಡಬ್ಲ್ಯೂಸಿಎ:ಎಫ್‌ಸಿ:122/2003**

**ಅರ್ಜಿದಾರರು** ವಿರುದ್ಧ **ಪ್ರತಿವಾದಿಗಳು**

1. ಶ್ರೀಮತಿ ಸಿದ್ದಮ್ಮ ಕೋಂ ಲೇಟ್ ಲಾಯಪ್ಪ
2. ಬೋರಯ್ಯ ಬಿನ್ ಲೇಟ್ ಲಾಯಪ್ಪ
   ಸಿದ್ಧಾರ್ಥನಗರ ವಾಸ ಮದ್ದೂರು ಟೌನ್,
   ಮಂಡ್ಯ ಜಿಲ್ಲೆ.

1. ಶ್ರೀಮತಿ ಕೆ.ಎಸ್. ಇಂದ್ರಮ್ಮ
   J-128, 10th ಕ್ರಾಸ್ ಶ್ರೀರಾಮಪುರ, ಬೆಂಗಳೂರು.
2. ಬ್ರಾಂಚ್ ಮ್ಯಾನೇಜರ್,
   ಓರಿಯೆಂಟಲ್ ಇನ್ಸೂರೆನ್ಸ್ ಕಂ.ಲಿ., ಎಂ.ಸಿ. ರಸ್ತೆ, ಮಂಡ್ಯ.

**ಅಧಿಸೂಚನೆ**

ಅರ್ಜಿದಾರರಾದ ಶ್ರೀಮತಿ ಸಿದ್ದಮ್ಮ ಅವರು ತಮ್ಮ ಮಗನಾದ ಶ್ರೀ ಸಿದ್ದರಾಜು ಆಲಿಯಾಸ್ ಪಾಪ ಅವರು ಒಂದನೇ ಪ್ರತಿವಾದಿ ಶ್ರೀಮತಿ ಕೆ.ಎಸ್. ಇಂದ್ರಮ್ಮ ರವರ ಬಳಿ ಚಾಲಕ:ಕ್ಲೀನರ್:ಕೂಲಿ ಆಗಿದ್ದು, ಕರ್ತವ್ಯ ನಿರತನಾಗಿದ್ದಾಗ ದಿನಾಂಕ:22.8.03 ರಂದು ಅಪಘಾತಕ್ಕೀಡಾಗಿ ಮರಣ ಹೊಂದಿರುತ್ತಾರೆಂದು ತಿಳಿಸಿ ಮೃತನ ಅವಲಂಬಿತರಾದ ಅವರಿಗೆ ಪರಿಹಾರವನ್ನು ಕೊಡಿಸಿಕೊಡಬೇಕೆಂದು ಈ ನ್ಯಾಯಾಲಯಕ್ಕೆ ಅರ್ಜಿ ಸಲ್ಲಿಸಿರುತ್ತಾರೆ.

ಆದ್ದರಿಂದ ಈ ವಿಷಯದಲ್ಲಿ ಈ ಅರ್ಜಿದಾರರಲ್ಲದೆ ಬೇರೆ ಯಾರಾದರೂ ಅರ್ಜಿದಾರರಿದ್ದು, ಅವರ ಅರ್ಜಿ ಅಥವಾ ತಕರಾರು ಏನಾದರೂ ಇದ್ದರೆ ಮತ್ತು ಈ ಅರ್ಜಿಗೆ ಸಂಬಂಧಿಸಿ ಇನ್ನಿತರೇ ಯಾವುದೇ ರೀತಿಯ ತಕರಾರು ಇದ್ದರೆ ಈ ಅಧಿಸೂಚನೆ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಕಟಣೆಯಾದ ದಿನದಿಂದ 30 ದಿನಗಳ ಒಳಗಾಗಿ ಈ ನ್ಯಾಯಾಲಯಕ್ಕೆ ಸಲ್ಲಿಸಲು ಈ ಮೂಲಕ ತಿಳಿಸಲಾಗಿದೆ. ಈ ನಿಗದಿತ ಸಮಯದಲ್ಲಿ ಈ ನ್ಯಾಯಾಲಯವು ಯಾವ ಕ್ಲೇಂ ಅರ್ಜಿ: ತಕರಾರು ಅರ್ಜಿ ಸ್ವೀಕರಿಸದಿದ್ದಲ್ಲಿ ಈ ನ್ಯಾಯಾಲಯವು ಮುಂದಿನ ಕ್ರಮ ಜರುಗಿಸುತ್ತದೆಂದು ತಿಳಿಸಲಾಗಿದೆ.

ಈ ಅಧಿಸೂಚನೆಯನ್ನು ನನ್ನ ಹಸ್ತಾಕ್ಷರ ಮತ್ತು ಈ ನ್ಯಾಯಾಲಯದ ಮೊಹರಿನೊಂದಿಗೆ ಇದೇ ದಿನಾಂಕ 22.12.03 ರಂದು ನೀಡಲಾಗಿದೆ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ಪರಿಹಾರ ಆಯುಕ್ತರು,
ಮಂಡ್ಯ ಉಪವಿಭಾಗ-2, ಮಂಡ್ಯ-571 401.

ಪಿ.ಆರ್. 54

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ:ಕಾನಪ:70/03/617, ದಿನಾಂಕ: 8ನೇ ಡಿಸೆಂಬರ್ 2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಫಕ್ಕೀರಪ್ಪ S/o ಹೆಗ್ಗಪ್ಪ ಕರಿಯಮ್ಮನವರ್
ಬಸ್ತಿ ಕೇರಿ, ಲಕ್ಷ್ಮೇಶ್ವರ ಪಟ್ಟಣದಲ್ಲಿ,
ಶಿರಹಟ್ಟಿ ತಾಲ್ಲೂಕು, ಗದಗ ಜಿಲ್ಲೆ.

1. ಗೋವರ್ಧನ ದಾಸ್ S/o ಬಿಹಾರಿ ಲಾಲ್ ಭುಟಾಡ
No:299/A ಅರಳಿಕಟ್ಟಿ ಹತ್ತಿರ, ಸ್ಟೇಷನ್ ರಸ್ತೆ,
ಬಾಗಲಕೋಟೆ.
2. ಬ್ರಾಂಚ್ ಮ್ಯಾನೇಜರ್, ನ್ಯಾಷನಲ್ ಇನ್‌ಶ್ಯೂರೆನ್ಸ್
ಕಂ. ಲಿ., ಬಾಗಲಕೋಟೆ ಹಾಗೂ ಗದಗ.

**ಪ್ರಕಟಣೆ**

ಅರ್ಜಿದಾರರಾದ ಫಕ್ಕೀರಪ್ಪ S/o ಹೆಗ್ಗಪ್ಪ ಕರಿಯಮ್ಮನವರ್ ಇವರು ತಾವು ಮೃತ ಮಹಂತೇಶ್ ಇವರ ತಂದೆ ಮತ್ತು ಆಶ್ರಿತರು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಮೃತ ಮಹಂತೇಶ್ ಇವರು ಒಂದನೇ ಪ್ರತಿವಾದಿಗಳಾದ ಗೋವರ್ಧನ ದಾಸ್ ಇವರಲ್ಲಿ ಹಮಾಲಿ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಗದಗ ಜಿಲ್ಲೆ, ಗದಗ.

ಪಿ.ಆರ್. 55

**ಕಾರ್ಮಿಕ ಅಧಿಕಾರಿ ಮತ್ತು ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು, ಗದಗ ಜಿಲ್ಲೆ, ಗದಗ ಇವರ ನ್ಯಾಯಾಲಯದಲ್ಲಿ**

**ಸಂಖ್ಯೆ:ಕಾಅಗ:ಕಾನಪ:72/03/640, ದಿನಾಂಕ: 16/24ನೇ ಡಿಸೆಂಬರ್ 2003**

**ಅರ್ಜಿದಾರರು** **ವಿರುದ್ಧ** **ಪ್ರತಿವಾದಿಗಳು**

1. ಶ್ರೀ ಶೇಖರಪ್ಪ S/o ದೊಡ್ಡಕರಿಯಪ್ಪ ಸಂಪಣ್ಣೆ
2. ಶ್ರೀಮತಿ ರೇಣವ್ವ W/o ಶೇಖರಪ್ಪ ಸಂಪಣ್ಣೆ
ಇಬ್ಬರೂ ಹಳ್ಳಿಕೇರಿ
ವಾಸ ಮುಂಡರಗಿ ತಾಲ್ಲೂಕು ಗದಗ ಜಿಲ್ಲೆ.

1. ಮ್ಯಾನೇಜರ್,
M/s. ಸಾತವಾನ ಇಸ್ಪಾಟ್ ಲಿ. ಬಳ್ಳಾರಿ
17th ವಾರ್ಡ್ ಕೊಲಚಲಮ್ಮ ಕಾಂಪೌಂಡ್
ಟ್ರಕ್ ಮಾಲಿಕ KA-02/B-4932.
2. ದಿ ಡಿವಿಜನಲ್ ಮ್ಯಾನೇಜರ್
ನ್ಯೂ ಇಂಡಿಯಾ ಅಶ್ಯೂರೆನ್ಸ್ ಕಂ. ಲಿ., ಬಳ್ಳಾರಿ.

**ಪ್ರಕಟಣೆ**

ಅರ್ಜಿದಾರರಾದ ಶೇಖರಪ್ಪ ಮತ್ತು ಶ್ರೀಮತಿ ರೇಣವ್ವ W/o ಶೇಖರಪ್ಪ ಇವರು, ತಾವು ಮೃತ ಉಮೇಶ್ ಇವರ ತಂದೆ ಮತ್ತು ತಾಯಿ ಮತ್ತು ಆಶ್ರಿತರು ಎಂದೂ, ಅವರ ಮರಣದಿಂದ ನಷ್ಟ ಪರಿಹಾರ ಕೋರಿ ಈ ನ್ಯಾಯಾಲಯದಲ್ಲಿ ಅರ್ಜಿ ಸಲ್ಲಿಸಿರುತ್ತಾರೆ.

ಮೃತ ಉಮೇಶ್ ಇವರು ಒಂದನೇ ಪ್ರತಿವಾದಿಗಳಾದ ಮ್ಯಾನೇಜರ್ ಸಾತವಾನ ಇಸ್ಪಾಟ್ ಲಿ. ಇವರಲ್ಲಿ ಕ್ಲೀನರ್ ಆಗಿ ಕೆಲಸ ನಿರ್ವಹಿಸುತ್ತಿದ್ದಾಗ, ಸಂಭವಿಸಿದ ಅಪಘಾತದಲ್ಲಿ ಮರಣ ಹೊಂದಿದರೆಂದು, ಸದರಿ ಅರ್ಜಿದಾರರು ತಿಳಿಸಿರುತ್ತಾರೆ. ಈ ಸಂಬಂಧವಾಗಿ ಈ ಪ್ರಕಟಣೆಯ ಮೂಲಕ ಸಾರ್ವಜನಿಕರಿಗೆ ಮತ್ತು ಸಂಬಂಧಪಟ್ಟವರಿಗೆ ತಿಳಿಸುವುದೇನೆಂದರೆ, ಈ ಬಗ್ಗೆ ಏನಾದರೂ ಆಕ್ಷೇಪಣೆಗಳಾಗಲಿ ಅಥವಾ ಬೇರೆ ಯಾರಾದರೂ ಮೃತರ ಶಾಸನಬದ್ಧ ವಾರಸುದಾರರು ಎಂದು ಪರಿಗಣಿಸಬೇಕೆಂದು ಪ್ರಾರ್ಥಿಸುವುದಾದರೆ, ಅಂತಹವರು ಈ ಪ್ರಕಟಣೆಯು ಈ ನ್ಯಾಯಾಲಯದಲ್ಲಿ ನಾಮಫಲಕದಲ್ಲಿ ಪ್ರಕಟಿಸಿದ 30 ದಿನಗಳೊಳಗಾಗಿ ಅಂತಹ ಆಕ್ಷೇಪಣೆಗಳಾಗಲೀ ಅಥವಾ ಅರ್ಜಿಯನ್ನಾಗಲೀ ಈ ನ್ಯಾಯಾಲಯದಲ್ಲಿ ಸಲ್ಲಿಸತಕ್ಕದ್ದು. ಅವಧಿ ಮೀರಿ ಬಂದ ಅರ್ಜಿಗಳನ್ನು ಮಾನ್ಯ ಮಾಡಲಾಗುವುದಿಲ್ಲ.

ಕಾರ್ಮಿಕ ಅಧಿಕಾರಿ ಹಾಗೂ ಕಾರ್ಮಿಕ ನಷ್ಟ ಪರಿಹಾರ ಆಯುಕ್ತರು,
ಗದಗ ಜಿಲ್ಲೆ, ಗದಗ

ಪಿ.ಆರ್. 56

**IN THE MATTER OF COMPANIES ACT, 1956**
**AND**
**SHIMOGA TRANSPORT COMPANY PRIVATE LIMITED**
**registered on 6th December 1989**

At the Extraordinary General Meeting of the above named company held at Registered Office: S.G.M.T.Co.Ltd. Building, Mandli, New Thirthalli Road, Shimoga-577201 on 20th January 2004 the following resolution was passed:

"RESOLUTION (Special)

"RESOLVED that, pursuant to section 484(i)(b) of the Companies Act, 1956 the company be wound up voluntarily"

Place: Shimoga **P. SURESH NAYAK**
Date: 21st January 2004. Liquidator

**Form No 151**
**[See Rule 315]**
**COMPANIES ACT, 1956**
**MEMBERS' VOLUNTARY WINDING UP**
**Notice by Liquidator of his appointment under Section 516 and rule 315**
**(Date of Incorporation of the Company: 6th December 1989)**

| | | |
|---|---|---|
| Name of Company | : | SHIMOGA TRANSPORT COMPANY PRIVATE LIMITED |
| Nature of business | : | Passenger Transport |
| Address of Registered Office | : | S.G.M.T.Co.Ltd. Building,<br>Mandli, New Thirthalli Road, SHIMOGA-577201. |
| Name and address of Liquidator | : | P. Suresh Nayak,<br>Chartered Accountant, 202, Sterling Heights,<br>9th Cross, Malleswaram, BANGALORE-560 003. |
| Date of Appointment | : | 20th January 2004 |
| By whom appointed | : | Members by Special Resolution |

**P. SURESH NAYAK**
P.D. 4 Liquidator

**IN THE MATTER OF COMPANIES ACT, 1956**
**AND**
**SREE VINAYAKA TRANSPORT COMPANY PRIVATE LIMITED registered on 6TH DECEMBER 1989**

At the Extra-ordinary General Meeting of the above named company held at Registered Office: S.G.M.T.Co.Ltd. Building, P.B. 31, New B.H. Road, Sagar - 577401 on 20th January 2004 the following resulution was passed:

"RESOLUTION (Special)

"RESOLVED that, pursuant to section 484(i)(b) of the Companies Act, 1956 the company be wound up voluntarily"

Place: Sagar **P. SURESH NAYAK**
Date: 21st January 2004. Liquidator

**Form No 151**
**[See Rule 315]**
**COMPANIES ACT, 1956**
**MEMBERS' VOLUNTARY WINDING UP**
**Notice by Liquidator of his appointment under Section 516 and rule 315**
**(Date of Incorporation of the Company: 6th December 1989)**

| | | |
|---|---|---|
| Name of Company | : | SREE VINAYAKA TRANSPORT COMPANY PRIVATE LIMITED |
| Nature of business | : | Passenger Transport |
| Address of Registered Office | : | S.G.M.T.Co.Ltd. Building,<br>P.B.No.31, New B.Road, SAGAR-577401. |
| Name and address of Liquidator | : | P. Suresh Nayak,<br>Chartered Accountant, 202, Sterling Heights,<br>9th Cross, Malleswaram, BANGALORE-560 003. |
| Date of Appointment | : | 20th January 2004 |
| By whom appointed | : | Members by Special Resolution |

**P. SURESH NAYAK**
P.D. 5 Liquidator

## 6ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ಮಹಾನಗರ

### ಅಧಿಸೂಚನೆ

### ಸೀಮಿಸ್ ಸಂ. 04/04 ದಿನಾಂಕ: 5ನೇ ಜನವರಿ 2004

ಈ ಮೂಲಕ ಸಾರ್ವಜನಿಕರಿಗೆ ತಿಳಿಯಪಡಿಸುವುದೇನೆಂದರೆ, ಈ ಹಿಂದೆ ವಿಲ್ಸನ್ ಗಾರ್ಡನ್ ಪೊಲೀಸ್ ಠಾಣೆಯಲ್ಲಿ ವಶಪಡಿಸಿಕೊಂಡಿದ್ದ ಈ ಕೆಳಕಂಡ ಮಾಲುಗಳ ವಾರಸುದಾರರು ಈವರೆಗೂ ಪತ್ತೆಯಾಗಿರುವುದಿಲ್ಲ. ವಾರಸುದಾರರು ಯಾರಾದರೂ ಇದ್ದಲ್ಲಿ ತಮ್ಮ ವಾರಸುದಾರಿಕೆಯನ್ನು ಈ ವಿಷಯ ಪ್ರಕಟಗೊಂಡ 30 ದಿನಗಳ ಒಳಗಾಗಿ ರುಜುವಾತು ಪಡಿಸಿ ತಮ್ಮ ಮಾಲುಗಳನ್ನು ಪಡೆಯಬಹುದಾಗಿದೆ. ತಪ್ಪಿದಲ್ಲಿ ಸದರಿ ಮಾಲುಗಳನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಲಾಗುವುದು.

| ಕ್ರ. ಸಂ. | ಮೊ.ಸಂಖ್ಯೆ | ಮಾಲು ಪಟ್ಟಿ ಸಂಖ್ಯೆ | ಮಾಲುಗಳ ವಿವರ |
|---|---|---|---|
| 1. | 582/78 | 251/78 | 1. ಒಂದು ಚಿನ್ನದ ಮೂಗುತಿ<br>2. ಒಂದು ಬೆಳ್ಳಿಯ ಉಡುದಾರ. |
| 2. | 859/80 | 86/80 | ಒಂದು ಬೆಳ್ಳಿಯ ಗಟ್ಟಿತೂಕ, ಸುಮಾರು 57 ಗ್ರಾಂಗಳು. |
| 3. | 859/80 | 90/80 | 1. ಒಂದು ಜೊತೆ ಬೆಳ್ಳಿಯ ಕಾಲುಚೈನು<br>2. ನಾಲ್ಕು ಚಿಕ್ಕ ಸ್ಟೀಲ್ ಲೋಟಗಳು |
| 4. | 54/80 | 12/80 | ಮೂರು ಲಾಗ್ ಪುಸ್ತಕಗಳು |
| 5. | 910/82 | 43/82 | ಒಂದು ಚಿಕ್ಕ ಟಾರ್ಚ್ |
| 6. | 910/82 | 50/82 | ಒಂದು ಬೆಳ್ಳಿಯ ಗಟ್ಟಿ, ತೂಕ ಸುಮಾರು 2.25 ಕಿಲೋ ಗ್ರಾಂಗಳು. |
| 7. | 569/94 | 60/94 | ಒಂದು ಕಾರ್ ಟೇಪ್‌ರೆಕಾರ್ಡರ್ (ಫ್ಲಾಷ್ ಸೂಪರ್ ಡೀಲಕ್ಸ್ ಎಂದಿರುತ್ತೆ) |
| 8. | 569/94 | 61/94 | 1. ಒಂದು ಹಳೆಯ ಸಾನಿಯೋ ಕಾರ್ ಸ್ಟೀರಿಯೋ.<br>2. ಒಂದು ಕಪ್ಪು ಬಣ್ಣದ ಕಾರ್ ಸ್ಟೀರಿಯೋ (ಹೆಸರು ಇರುವುದಿಲ್ಲ) |

**ಜಿ.ಎಂ. ಕುಂಬಾರ್**

ಪಿ.ಆರ್. 64 6ನೇ ಎ.ಸಿ.ಎಂ.ಎಂ. ನ್ಯಾಯಾಲಯ, ಬೆಂಗಳೂರು ಮಹಾನಗರ.

## ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ

**ಉಪಸ್ಥಿತರು:** ಕೆ. ಲೋಕನಾಥ ಶೆಟ್ಟಿ
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಫಿರ್ಯಾದಿ:** ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಮಾಲೀಕರು:** ಇಲ್ಲ.

**ಪ್ರಸ್ತಾವನೆ:**

ದಿನಾಂಕ:29-09-01 ರಂದು ಒಂದು ಮಾರುತಿ ಮಿನಿ ವ್ಯಾನ್ ನೊಂದಣಿ ಸಂಖ್ಯೆ: ಎಂಹೆಚ್:04:ವೈ:1155 ರಲ್ಲಿ ಒಟ್ಟು 131 ಕೆಜಿ ಶ್ರೀಗಂಧವನ್ನು ಯಾರೋ ಯಾವುದೇ ತರಹದ ರಹದಾರಿ ಇಲ್ಲದೇ ತರೀಕೆರೆ ತಾಲ್ಲೂಕು ಅಜ್ಜಂಪುರ ಹೊಸದುರ್ಗ ಮುಖ್ಯ ರಸ್ತೆಯ ಸೊಲ್ಲಾಪುರ ಗೇಟ್‌ನ ಬಳಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಿಸುತ್ತಿದ್ದಾಗ, ಶಿವಮೊಗ್ಗ ಅರಣ್ಯ ಸಂಚಾರಿ ದಳದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಹಾಗೂ ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಪಂಚನಾಮೆ ಕ್ರಮ ಜರುಗಿಸಿ ವಾಹನ ಹಾಗೂ ಶ್ರೀಗಂಧದ ಬಗ್ಗೆ ಅರಣ್ಯ ಮೊಕದ್ದಮೆ ಸಂಖ್ಯೆ:56:01-02 ನ್ನು ದಾಖಲು ಮಾಡಿಕೊಂಡು ವಾಹನ ಮಾರುತಿ ಒಮಿನಿ ವ್ಯಾನ್ ನೊಂದಣಿ ಸಂಖ್ಯೆ :ಎಂಹೆಚ್:04:ವೃ:1155 ರ ಇಂಜಿನ್ ನಂ.1727428, ಛಾಸ್ಸಿ ನಂ. 277420 ಎಂದಿರುತ್ತದೆಂದು, ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಆಸಾಮಿಗಳು ಪತ್ತೆಯಾಗಿರುವುದಿಲ್ಲವೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಯವರು ಈ ಪ್ರಾಧಿಕಾರಕ್ಕೆ ಹಾಜರ್ ಪಡಿಸಿರುತ್ತಾರೆ. ಅದರಂತೆ ವಾಹನ ಮತ್ತು ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ರವರ ಸುಪರ್ದಿಗೆ ಸುರಕ್ಷತೆಗಾಗಿ ಮುಂದಿನ ಆದೇಶವಾಗುವವರೆವಿಗೂ ಇಟ್ಟುಕೊಳ್ಳಲು ಆದೇಶಿಸಲಾಗಿತ್ತು.

ಅನಂತರ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಕುರಿತು 30 ದಿವಸಗಳ ಕಾಲಾವಕಾಶವನ್ನು ನೀಡಿ, ವಾಹನ ಮಾಲೀಕರು:ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟಂತೆ, ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲಿಕತ್ವವನ್ನು ರುಜು ವಾತುಪಡಿಸುವುದು. ತಪ್ಪಿದಲ್ಲಿ ವಾಹನ ಮತ್ತು ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಕುರಿತು ಮುಂದಿನ ಕ್ರಮ ಕೈಗೊಳ್ಳಲಾಗುವುದು

ಎಂಬ ಪ್ರಕಟಣೆಯನ್ನು ದಿನಾಂಕ:19-08-02ರ ಕ್ರಾಂತಿದೀಪ ಹಾಗೂ ಕನ್ನಡಪ್ರಭ ಕನ್ನಡ ದಿನಪತ್ರಿಕೆಯಲ್ಲಿ ಹಾಗೂ 26ನೇ ಆಗಸ್ಟ್ 02ರ ಭಾಗ-3 ಪುಟ ಸಂಖ್ಯೆ:1731ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಈ ಮಧ್ಯೆ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರ ವಿಳಾಸವನ್ನು ಕೋರಿ ಟ್ರಾನ್ಸ್‌ಪೋರ್ಟ್ ಕಮಿಶನರ್, ಬಾಂಬೆರವರಿಗೆ ಈ ಪ್ರಾಧಿಕಾರದಿಂದ ದಿನಾಂಕ:04-10-01 ರಂದು ಪತ್ರಬರೆದಿದ್ದು, ಅದು ಜಾರಿಯಾಗದೇ ವಾಪಸ್ಸು ಬಂದಿರುತ್ತದೆ. ಪುನಃ ದಿನಾಂಕ:28-12-01 ರಂದು ಟ್ರಾನ್ಸ್‌ಪೋರ್ಟ್ ಕಮಿಶನರ್, ಮುಂಬಾಯಿರವರಿಗೆ ಪತ್ರ ಬರೆದಿದ್ದು ಅದು ಸಹ ಜಾರಿಯಾಗದೇ ವಾಪಸ್ಸು ಬಂದಿರುತ್ತದೆ. ಅನಂತರ, ಸಾರಿಗೆ ಆಯುಕ್ತರು, ಬೆಂಗಳೂರುರವರಿಗೆ ಈ ಪ್ರಕರಣದ ವಿಷಯದ ಬಗ್ಗೆ ತಿಳಿಸಿ, ವಶಪಡಿಸಿಕೊಂಡ ವಾಹನಕ್ಕೆ ಸಂಬಂಧಪಟ್ಟ ಸಾರಿಗೆ ಅಧಿಕಾರಿಯವರ ವಿಳಾಸವನ್ನು ಕೋರಿ ದಿನಾಂಕ:31-10-2001 ಮತ್ತು 31-12-01 ರಂದು ಎರಡು ಪತ್ರ ಬರೆಯಲಾಗಿದ್ದರೂ ಯಾವುದೇ ಮಾಹಿತಿ ಬಾರದೇ ಇರುವುದರಿಂದ, ಕೊನೆಯದಾಗಿ ದಿನಾಂಕ:26-3-02 ರಂದು ಸಾರಿಗೆ ಆಯುಕ್ತರು ಬೆಂಗಳೂರುರವರಿಗೆ ರಿಜಿಸ್ಟರ್ ಅಂಚೆ ಮುಖಾಂತರ ಪತ್ರ ಬರೆದಿದ್ದು, ಅದು ಜಾರಿಯಾಗಿದ್ದು, ಸ್ವೀಕೃತಿ ಪತ್ರ ಈ ಕಛೇರಿಗೆ ಬಂದಿರುತ್ತದೆ. ಆದರೆ ಈವರೆವಿಗೂ ಸದರಿ ವಾಹನದ ಬಗ್ಗೆ ಯಾವುದೇ ಮಾಹಿತಿ ಈ ಪ್ರಾಧಿಕಾರಕ್ಕೆ ಬಂದಿರುವುದಿಲ್ಲ.

ಮುಂದುವರಿದು ಹಾಲಿ ವಾರಸುದಾರರನ್ನು ಪತ್ತೆ ಹಚ್ಚುವ ಬಗ್ಗೆ ಎಷ್ಟೇ ಪ್ರಯತ್ನವನ್ನು ಪಟ್ಟರೂ ಕೂಡ ಹಾಲಿ ವಾರಸುದಾರರು ಪತ್ತೆಯಾಗದೇ ಇರುವುದರಿಂದ ಅಲ್ಲದೇ ಪ್ರಕಟಣೆಯಂತೆ 30 ದಿವಸಗಳೊಳಗಾಗಿ ಯಾವುದೇ ಅಹವಾಲು ಬಾರದಿದ್ದಲ್ಲಿ, 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಯಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಕೈಗೊಳ್ಳಲಾಗುವುದಾಗಿ ಪ್ರಕಟಣೆಯನ್ನು ನೀಡಲಾಗಿತ್ತು. ನಿಗದಿತ ಕಾಲಾವಕಾಶವು ಈಗಾಗಲೇ ಮುಗಿದಿದ್ದು, ಈ ಮೊಕದ್ದಮೆಗೆ ಸಂಬಂಧಪಟ್ಟಂತೆ ಸಾಕಷ್ಟು ಕಾಲಾವಕಾಶವನ್ನು ಕೊಟ್ಟಿದ್ದರೂ ಕೂಡ ಯಾವುದೇ ವ್ಯಕ್ತಿಗಳು ವಾಹನವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಕಾರಣ, ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಮುದ್ದೆ ಮಾಲುಗಳನ್ನು ಪರಿಶೀಲಿಸಿ ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ, ಹಾಗೂ ಸದರಿ ವಾಹನದ ಮಾಲೀಕರನ್ನು ಪತ್ತೆಹಚ್ಚಲು ಎಲ್ಲ ರೀತಿಯ ಕ್ರಮ ಕೈಗೊಂಡಾಗ್ಯೂ ಸಾಧ್ಯವಾಗದೇ ಇರುವುದರಿಂದ, ಬಹಳಷ್ಟು ದಿನ ವಿಲೇವಾರಿ ಮಾಡದೇ ಬಿಟ್ಟಲ್ಲಿ, ವಾತಾವರಣದ ವೈಪರೀತ್ಯದಿಂದಾಗಿ ವಾಹನದ ಬಿಡಿಭಾಗಗಳು ತುಕ್ಕು ಹಿಡಿದು ಅದರ ಮೌಲ್ಯವನ್ನು ಕಳೆದುಕೊಳ್ಳುವುದರಿಂದ, ಹಾಗೂ ಇಲಾಖೆಯಲ್ಲಿ ವಾಹನದ ಸುಸ್ಥಿತಿಯನ್ನು ಕಾಪಾಡಲು ಕಷ್ಟ ಸಾಧ್ಯವಾಗುತ್ತದೆ. ಅಲ್ಲದೇ ವಾಹನ ಮಾಲೀಕರಿಗೆ ಮಾಲಿಕತ್ವವನ್ನು ಸಾಬೀತುಪಡಿಸಲು ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ಮುಂದೆ ಬರುವ ಸಾಧ್ಯತೆ ಇಲ್ಲದಿರುವ ಕಾರಣ ಅಲ್ಲದೇ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಹಾಗೂ ಸ್ವತಃ ತಾನೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಭಾವಿಸಬಹುದಾಗಿರುತ್ತದೆ. ಅಲ್ಲದೇ ದಿನಾಂಕ:12.7.01 ರಂದು ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆ ಮಾಡುತ್ತಿದ್ದಾಗ ಫಿರ್ಯಾದಿದಾರರು ಪತ್ತೆ ಹಚ್ಚಿ ಸ್ಥಳ ಮಹಜರ್‌ನೊಂದಿಗೆ ಅಕ್ರಮ ಶ್ರೀಗಂಧವನ್ನು ವಶಪಡಿಸಿಕೊಂಡು, ಮೊಕದ್ದಮೆಯನ್ನು ದಾಖಲು ಮಾಡಿ, ಸದರಿ ದಾಖಲೆಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಈ ನ್ಯಾಯಾಲಯಕ್ಕೆ ಒಪ್ಪಿಸಿದ ಪಂಚನಾಮೆಯನ್ನು ಯಾರೂ ಸಹ ಪ್ರಶ್ನಿಸಿಲ್ಲವಾದ್ದರಿಂದ ಇನ್ನು ಕಾಲಾವಕಾಶ ನೀಡುವುದು ಅನಾವಶ್ಯಕವೆಂದು ನಿರ್ಣಯಿಸಿ, ಸದರಿ ವಾಹನವನ್ನು ವಿಲೇವಾರಿ ಮಾಡಿ ಸರ್ಕಾರಕ್ಕೆ ಹೆಚ್ಚಿನ ಆದಾಯ ತರುವ ಹಿತದೃಷ್ಟಿಯಿಂದ ಹಾಗೂ ದಿನಾಂಕ:29.9.01 ರಂದು ಮಾರುತಿ ಒಮಿನಿ ವ್ಯಾನ್ ಸಂಖ್ಯೆ:ಎಂಹೆಚ್:04:ವೈ:1155 ರಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುತ್ತಿರುವುದು, ಸಂಬಂಧಪಟ್ಟ ದಾಖಲೆಯಿಂದ ದೃಢಪಟ್ಟಿರುವುದರಿಂದ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುವುದರಿಂದ, ಈ ಆದೇಶ.

**ಆದೇಶ**

**ದಿನಾಂಕ: 30ನೇ ಡಿಸೆಂಬರ್ 2003**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಕೆ. ಲೋಕನಾಥಶೆಟ್ಟಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯಕಾಯ್ದೆ 1963ರ ಸೆಕ್ಷನ್ 71ಎ ರಂತೆ ಪ್ರದತ್ತವಾದ ಅಧಿಕಾರದಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮಾರುತಿ ಒಮಿನಿ ವ್ಯಾನ್ ನೊಂದಣಿ ಸಂಖ್ಯೆ:ಎಂಹೆಚ್: 04:ವೈ:1155 ಇಂಜಿನ್ ನಂ. 1727428 ಛಾಸ್ಸಿ ಸಂಖ್ಯೆ:277420 ಮತ್ತು 131 ಕೆಜಿ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು ವಾಹನ ಮತ್ತು ಅದರ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ:30.12.03 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದರೆ ಅದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವನ್ನು ದಿನಾಂಕ:30.12.03 ರಂದು ಬೆರಳಚ್ಚು ಮಾಡಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿದ್ದೇನೆ.

**ಕೆ. ಲೋಕನಾಥಶೆಟ್ಟಿ**

ಪಿ.ಆರ್. 50

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ**

**ಉಪಸ್ಥಿತರು:** ಕೆ. ಲೋಕನಾಥ ಶೆಟ್ಟಿ
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಫಿರ್ಯಾದಿ:** ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಮಾಲೀಕರು:** ಇಲ್ಲ.

**ಪ್ರಸ್ತಾವನೆ:**

ದಿನಾಂಕ:4.3.02 ರಂದು ಒಂದು ಮೆಟಡೋರ್ ವ್ಯಾನ್ ನೊಂದಣಿ ಸಂಖ್ಯೆ:ಕೆಎ:20:2841 ರಲ್ಲಿ ಒಟ್ಟು 88 ಕೆಜಿ ಶ್ರೀಗಂಧವನ್ನು ಯಾವುದೇ ತರಹದ ರಹದಾರಿ ಇಲ್ಲದೇ ಮುಡುಬ ಕ್ರಾಸ್ ತುಂಗಾಸೇತುವೆ ಬಳಿ ಅಕ್ರಮವಾಗಿ ಸಾಗಿಸುತ್ತಿದ್ದಾಗ ಶಿವಮೊಗ್ಗ ಅರಣ್ಯ ಸಂಚಾರಿ ದಳದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು, ಪಂಚನಾಮೆ ಕ್ರಮ ಜರುಗಿಸಿ ವಾಹನ ಹಾಗೂ ಶ್ರೀಗಂಧದ ಬಗ್ಗೆ ಅರಣ್ಯ ಮೊಕದ್ದಮೆ ಸಂಖ್ಯೆ:105:01-02 ನ್ನು ದಾಖಲು ಮಾಡಿಕೊಂಡು ವಾಹನ ಮೆಟಡೊರ್ ವ್ಯಾನ್ ಸಂಖ್ಯೆ :ಕೆಎ:20:2841 ರ ಇಂಜಿನ್ ನಂ.051393, ಛಾಸ್ಸಿ ನಂ. 714737 ಎಂದಿರುತ್ತದೆಂದು ಹಾಗೂ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಆಸಾಮಿಗಳು ಪತ್ತೆಯಾಗಿರುವುದಿಲ್ಲವೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಈ ಪ್ರಾಧಿಕಾರಕ್ಕೆ ಹಾಜರ್ ಪಡಿಸಿರುತ್ತಾರೆ. ಅದರಂತೆ ವಾಹನ ಮತ್ತು ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ರವರ ಸುಪರ್ದಿಗೆ ಸುರಕ್ಷತೆಗಾಗಿ ಮುಂದಿನ ಆದೇಶವಾಗುವವರೆವಿಗೂ ಇಟ್ಟುಕೊಳ್ಳಲು ಆದೇಶಿಸಲಾಗಿತ್ತು.

ಅನಂತರ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಕುರಿತು 30 ದಿನಗಳ ಕಾಲಾವಕಾಶವನ್ನು ನೀಡಿ, ವಾಹನ ಮಾಲೀಕರು:ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟಂತೆ, ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲಿಕತ್ವವನ್ನು ರುಜುವಾತುಪಡಿಸುವುದು. ತಪ್ಪಿದಲ್ಲಿ ವಾಹನ ಮತ್ತು ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಕುರಿತು ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂಬ ಪ್ರಕಟಣೆಯನ್ನು ದಿನಾಂಕ:26.3.02ರ ಶಿವಮೊಗ್ಗ ಟೈಮ್ಸ್ ಹಾಗೂ ದಿನಾಂಕ:25.3.02ರ ಕಂಠೀರವ ಕನ್ನಡ ದಿನಪತ್ರಿಕೆ ಹಾಗೂ 25 ಏಪ್ರಿಲ್ 2002ರ ಭಾಗ-3ರ ಪುಟ ಸಂಖ್ಯೆ:876ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಈ ಮಧ್ಯೆ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಉಡುಪಿಯವರಲ್ಲಿ ಪತ್ರವ್ಯವಹರಿಸಿದಾಗ, ಸದರಿಯವರು ವಾಹನದ ಸಿ.ಸಿ.ಯನ್ನು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಳಗಾಂ ರವರಿಗೆ ಕಳುಹಿಸಲಾಗಿದೆ ಎಂದು ತಿಳಿಸಿದನ್ವಯ, ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಬೆಳಗಾಂರವರಲ್ಲಿ ಪತ್ರವ್ಯವಹರಿಸಿದಾಗ ವಾಹನದ ಬಿ ವರದಿಯನ್ನು ಕಳುಹಿಸಿರುತ್ತಾರೆ. ಸದರಿ ಬಿ ವರದಿಯನ್ನು ಪರಿಶೀಲಿಸಿದಾಗ ಬಿ ವರದಿಯಲ್ಲಿ ನಮೂದಿಸಿದ ವಾಹನದ ಇಂಜಿನ್ ನಂ ಹಾಗೂ ಛಾಸ್ಸಿ ನಂಬರ್‌ಗಳು, ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಇಂಜಿನ್ ಹಾಗೂ ಛಾಸ್ಸಿ ನಂಬರ್‌ಗಳು ತಾಳೆ ಹೊಂದುತ್ತಿಲ್ಲ. ಆದಾಗ್ಯೂ ಕೂಡ ಬಿ ವರದಿಯಂತೆ ವಾಹನ ಮಾಲೀಕರಾದ ನಾಮದೇವ್ ಬಿನ್ ಸಹದೇವ್, ಚೋಪಡಿ ಮಾಲಂಕಲ ಅಂಚೆ ಇಂದಲ್ ಲ್ಯಾಂಡ್, ಕಾನಾಪುರ ರವರಿಗೆ ಈ ಪ್ರಾಧಿಕಾರದಿಂದ ದಿನಾಂಕ:24.5.03 ರಂದು ಕಾರಣ ಕೇಳುವ ನೋಟೀಸನ್ನು ರಿಜಿಸ್ಟರ್ ಅಂಚೆಯಲ್ಲಿ ಕಳುಹಿಸಿದ್ದು, ಪತ್ರ ಜಾರಿಯಾಗಿದ್ದು, ಸ್ವೀಕೃತಿ ಈ ಕಛೇರಿಗೆ ಬಂದಿರುತ್ತದೆ. ಆದರೆ, ವಾಹನ ಮಾಲೀಕರು ಈವರೆವಿಗೂ ಈ ಪ್ರಾಧಿಕಾರಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ.

ಮುಂದುವರಿದು ಹಾಲಿ ವಾರಸುದಾರರನ್ನು ಪತ್ತೆ ಹಚ್ಚುವ ಬಗ್ಗೆ ಎಷ್ಟೇ ಪ್ರಯತ್ನವನ್ನು ಪಟ್ಟರೂ ಕೂಡ ಹಾಲಿ ವಾರಸುದಾರರು ಪತ್ತೆಯಾಗದೇ ಇರುವುದರಿಂದ ಅಲ್ಲದೇ ಪ್ರಕಟಣೆಯಂತೆ 30 ದಿವಸಗಳೊಳಗಾಗಿ ಯಾವುದೇ ಅಹವಾಲು ಬಾರದಿದ್ದಲ್ಲಿ, 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಯಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಕೈಗೊಳ್ಳಲಾಗುವುದಾಗಿ ಪ್ರಕಟಣೆಯನ್ನು ನೀಡಲಾಗಿತ್ತು. ನಿಗದಿತ ಕಾಲಾವಕಾಶವು ಈಗಾಗಲೇ ಮುಗಿದಿದ್ದು, ಈ ಮೊಕದ್ದಮೆಗೆ ಸಂಬಂಧಪಟ್ಟಂತೆ ಸಾಕಷ್ಟು ಕಾಲಾವಕಾಶವನ್ನು ಕೊಟ್ಟಿದ್ದರೂ ಕೂಡ ಯಾವುದೇ ವ್ಯಕ್ತಿಗಳು ವಾಹನವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲ. ಕಾರಣ, ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಮುದ್ದೆ ಮಾಲುಗಳನ್ನು ಪರಿಶೀಲಿಸಿ ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ, ಹಾಗೂ ಸದರಿ ವಾಹನದ ಮಾಲೀಕರನ್ನು ಪತ್ತೆಹಚ್ಚಲು ಎಲ್ಲ ರೀತಿಯ ಕ್ರಮಕೈಗೊಂಡಾಗ್ಯೂ ಸಾಧ್ಯವಾಗದೇ ಇರುವುದರಿಂದ, ಬಹಳಷ್ಟು ದಿನ ವಿಲೇವಾರಿ ಮಾಡದೇ ಬಿಟ್ಟಲ್ಲಿ, ವಾತಾವರಣದ ವೈಪರೀತ್ಯದಿಂದಾಗಿ ವಾಹನದ ಬಿಡಿಭಾಗಗಳು ತುಕ್ಕು ಹಿಡಿದು ಅದರ ಮೌಲ್ಯವನ್ನು ಕಳೆದುಕೊಳ್ಳುವುದರಿಂದ, ಹಾಗೂ ಇಲಾಖೆಯಲ್ಲಿ ವಾಹನದ ಸುಸ್ಥಿತಿಯನ್ನು ಕಾಪಾಡಲು ಕಷ್ಟ ಸಾಧ್ಯವಾಗುತ್ತದೆ. ಅಲ್ಲದೇ ವಾಹನ ಮಾಲೀಕರಿಗೆ ಮಾಲಿಕತ್ವವನ್ನು ಸಾಬೀತುಪಡಿಸಲು ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ಮುಂದೆ ಬರುವ ಸಾಧ್ಯತೆ ಇಲ್ಲದಿರುವ ಕಾರಣ ಅಲ್ಲದೇ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಹಾಗೂ ಸ್ವತಃ ತಾನೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಭಾವಿಸಬಹುದಾಗಿರುತ್ತದೆ. ಅಲ್ಲದೇ ದಿನಾಂಕ:4.3.02 ರಂದು ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆ ಮಾಡುತ್ತಿದ್ದಾಗ ಫಿರ್ಯಾದಿದಾರರು ಪತ್ತೆ ಹಚ್ಚಿ ಸ್ಥಳ ಮಹಜರ್‌ನೊಂದಿಗೆ ಅಕ್ರಮ ಶ್ರೀಗಂಧವನ್ನು ವಶಪಡಿಸಿಕೊಂಡು ಮೊಕದ್ದಮೆಯನ್ನು ದಾಖಲು ಮಾಡಿ,

ಸದರಿ ದಾಖಲೆಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಈ ನ್ಯಾಯಾಲಯಕ್ಕೆ ಒಪ್ಪಿಸಿದ ಪಂಚನಾಮೆಯನ್ನು ಯಾರೂ ಸಹ ಪ್ರಶ್ನಿಸಿಲ್ಲವಾದ್ದರಿಂದ ಇನ್ನು ಕಾಲಾವಕಾಶ ನೀಡುವುದು ಅನಾವಶ್ಯಕವೆಂದು ನಿರ್ಣಯಿಸಿ ಸದರಿ ವಾಹನವನ್ನು ವಿಲೇವಾರಿ ಮಾಡಿ ಸರ್ಕಾರಕ್ಕೆ ಹೆಚ್ಚಿನ ಆದಾಯ ತರುವ ಹಿತದೃಷ್ಟಿಯಿಂದ ಹಾಗೂ ದಿನಾಂಕ:4.3.02 ರಂದು ಮೆಟಡೋರ್ ವ್ಯಾನ್ ನೋಂದಣಿ ಸಂಖ್ಯೆ:ಕೆಎ:20-2841 ರಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುತ್ತಿರುವುದು ಸಂಬಂಧಪಟ್ಟ ದಾಖಲಾತಿಯಿಂದ ದೃಢಪಟ್ಟಿರುವುದರಿಂದ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುವುದರಿಂದ ಈ ಆದೇಶ.

**ಆದೇಶ**

**ಸಂಖ್ಯೆ:ಎ1:71ಎ:ಅಮೊ:105:01-02, ದಿನಾಂಕ: 30ನೇ ಡಿಸೆಂಬರ್ 2003**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಕೆ. ಲೋಕನಾಥಶೆಟ್ಟಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯಕಾಯ್ದೆ 1963ರ ಸೆಕ್ಷನ್ 71ಎ ರಂತೆ ಪ್ರದತ್ತವಾದ ಅಧಿಕಾರದಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮೆಟಡೋರ್ ವ್ಯಾನ್ (ಎಫ್-307) ನೊಂದಣಿ ಸಂಖ್ಯೆ:ಕೆಎ: 20:2841 ಇಂಜಿನ್ ನಂ. 051393, ಛಾಸ್ಸಿ ನಂ. 714737 ಮತ್ತು 88 ಕೆಜಿ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ಮುಟ್ಟುಗೋಲು ಹಾಕಿಕೊಂಡ ವಾಹನ ಮತ್ತು ಅದರ ಬಿಡಿಭಾಗಗಳನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡಲು ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ:30.12.03 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವು ದಿನಾಂಕ:30.12.03 ರಂದು ಬೆರಳಚ್ಚು ಮಾಡಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿದ್ದೇನೆ.

**ಕೆ. ಲೋಕನಾಥಶೆಟ್ಟಿ**

ಪಿ.ಆರ್. 51

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ**

**ಉಪಸ್ಥಿತರು:** ಕೆ. ಲೋಕನಾಥ ಶೆಟ್ಟಿ
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಫಿರ್ಯಾದಿ:** ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಮಾಲೀಕರು:** ಇಲ್ಲ.

**ಪ್ರಸ್ತಾವನೆ:**

ದಿನಾಂಕ:24.8.02 ರಂದು ಒಂದು ಮಾರುತಿ ಸುಜುಕಿ ಕಾರ್‌ನಲ್ಲಿ ಒಟ್ಟು 45 ಕೆಜಿ ತೂಕದ ಶ್ರೀಗಂಧವನ್ನು ಯಾರೋ ಆಸಾಮಿಗಳು ಯಾವುದೇ ತರಹದ ರಹದಾರಿ ಇಲ್ಲದೇ ಅಕ್ರಮವಾಗಿ ತೀರ್ಥಹಳ್ಳಿಯ ಸೀಬಿನಕೆರೆ ವೃತ್ತದಿಂದ ಹೊದ್ಲಕ್ಕೆ ಹೋಗುವ ರಸ್ತೆಯಲ್ಲಿ ಕುಶಾವತಿ ನದಿಗೆ ಅಡ್ಡಲಾಗಿ ಕಟ್ಟಿರುವ ಸೇತುವೆ ಬಳಿ ಸಾಗಿಸುತ್ತಿದ್ದಾಗ ಶಿವಮೊಗ್ಗ ಅರಣ್ಯ ಸಂಚಾರಿ ದಳದ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿ ಹಾಗೂ ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ ವಾಹನ ಹಾಗೂ ಶ್ರೀಗಂಧದ ಬಗ್ಗೆ ಅರಣ್ಯ ಮೊಕದ್ದಮೆ ಸಂಖ್ಯೆ:69:02-03ನ್ನು ದಾಖಲು ಮಾಡಿಕೊಂಡು ವಾಹನ ಮಾರುತಿ ಸುಜುಕಿ 800 ಕಾರ್ ನೊಂದಣಿ ಸಂಖ್ಯೆ:ಕೆಎ:15:ಎಂ:1225 ರ ಇಂಜಿನ್ ನಂ.ಐಎನ್. 186853, ಛಾಸ್ಸಿ ನಂ.ಎಸ್.ಬಿ. 308:ಬಿಎನ್:141884 ಎಂದಿರುತ್ತದೆಂದು ತಿಳಿಸುತ್ತಾ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ ಆಸಾಮಿಗಳು ಪತ್ತೆಯಾಗಿರುವುದಿಲ್ಲವೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ಸಹಾಯಕ ಅರಣ್ಯ ಸಂರಕ್ಷಣಾಧಿಕಾರಿಗಳು ಈ ಪ್ರಾಧಿಕಾರಕ್ಕೆ ಹಾಜರ್‌ಪಡಿಸಿರುತ್ತಾರೆ. ಅದರಂತೆ ವಾಹನ ಮತ್ತು ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ರವರ ಸುಪರ್ದಿಗೆ ಸುರಕ್ಷತೆಗಾಗಿ ಮುಂದಿನ ಆದೇಶವಾಗುವವರೆವಿಗೂ ಇಟ್ಟುಕೊಳ್ಳಲು ಆದೇಶಿಸಲಾಗಿತ್ತು.

ಅನಂತರ ಈ ಪ್ರಕರಣಕ್ಕೆ ಸಂಬಂಧಿಸಿದಂತೆ, ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಕುರಿತು 30 ದಿವಸಗಳ ಕಾಲಾವಕಾಶವನ್ನು ನೀಡಿ ವಾಹನ ಮಾಲೀಕರು:ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟಂತೆ, ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲಿಕತ್ವವನ್ನು ರುಜುವಾತುಪಡಿಸುವುದು. ತಪ್ಪಿದಲ್ಲಿ ವಾಹನ ಮತ್ತು ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಕುರಿತು ಮುಂದಿನ ಕ್ರಮ ಕೈಗೊಳ್ಳಲಾಗುವುದಾಗಿ ಪ್ರಕಟಣೆಯನ್ನು ಸಂಯುಕ್ತ ಕರ್ನಾಟಕ ಹಾಗೂ ಸಾಗರ ವಾರ್ತೆ ಕನ್ನಡ ದಿನಪತ್ರಿಕೆಯಲ್ಲಿ ದಿನಾಂಕ:5-9-02 ರಂದು ಹಾಗೂ 20 ಸೆಪ್ಟೆಂಬರ್ 2002ರ ಭಾಗ-3ರ ಪುಟಸಂಖ್ಯೆ:1911ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಈ ಮಧ್ಯೆ ಮೊಕದ್ದಮೆಯಲ್ಲಿ ಅಮಾನತ್ತುಪಡಿಸಿದ ವಾಹನದ ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, ಶಿವಮೊಗ್ಗರವರಲ್ಲಿ ಪತ್ರವ್ಯವಹರಿಸಿ ಬಿ ವರದಿಯನ್ನು ಪಡೆದು ಪರಿಶೀಲಿಸಿದಾಗ, ಬಿ ವರದಿಯಲ್ಲಿ ನಮೂದಿಸಿದ ಇಂಜಿನ್ ಹಾಗೂ ಛಾಸ್ಸಿ ನಂಬರ್‌ಗಳು ಪ್ರಕರಣದಲ್ಲಿ ವಶಪಡಿಸಿಕೊಂಡ ವಾಹನದ ಇಂಜಿನ್ ಹಾಗೂ ಛಾಸ್ಸಿ ನಂಬರ್‌ಗಳು ತಾಳೆಹೊಂದುತ್ತದೆ. ಹಾಗೂ ಸದರಿ ಬಿ ವರದಿಯಂತೆ ವಾಹನವು ಕುಮರುನ್ನೀಸ ಬಿನ್ ಸೈಯದ್ ಉಸ್ಮಾನ್ ಸಾಹೇಬ್ ಬಟ್ಟಮಕ್ಕಿ, ಸೀಬಿನಕೆರೆ, ತೀರ್ಥಹಳ್ಳಿ ಇವರ ಹೆಸರಿನಲ್ಲಿ ದಿನಾಂಕ:31-10-01 ರಿಂದ ಇರುತ್ತದೆಂದು ತಿಳಿಸಿದನ್ವಯ, ಈ ಪ್ರಾಧಿಕಾರದಿಂದ ರಿಜಿಸ್ಟರ್ ಅಂಚೆ ಮುಖಾಂತರ ಶ್ರೀಮತಿ ಕುಮರುನ್ನೀಸ ತೀರ್ಥಹಳ್ಳಿ ಇವರಿಗೆ ದಿನಾಂಕ:23-9-03 ಮತ್ತು 17-11-03 ರಂತೆ ಎರಡು ಕಾರಣ ಕೇಳುವ ನೋಟೀಸನ್ನು ಕಳುಹಿಸಿದ್ದು, ಅದು ಜಾರಿಯಾಗಿ ಸ್ವೀಕೃತಿ ಈ ಕಛೇರಿಗೆ ಬಂದಿರುತ್ತದೆ. ಆದರೆ, ಈವರೆವಿಗೂ ವಾಹನ ಮಾಲೀಕರು ಈ ಪ್ರಾಧಿಕಾರಕ್ಕೆ ಯಾವುದೇ ಉತ್ತರವನ್ನು ನೀಡಿರುವುದಿಲ್ಲ.

ಅಲ್ಲದೇ ಪ್ರಕಟಣೆಯಂತೆ 30 ದಿವಸಗಳೊಳಗಾಗಿ ಯಾವುದೇ ಅಹವಾಲು ಬಾರದಿದ್ದಲ್ಲಿ, 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಯಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಜರುಗಿಸಲಾಗುವುದು ಎಂಬುದಾಗಿ ಪ್ರಕಟಣೆಯನ್ನು ನೀಡಲಾಗಿತ್ತು. ನಿಗದಿತ ಕಾಲಾವಕಾಶವು ಈಗಾಗಲೇ ಮುಗಿದಿದ್ದು, ಈ ಮೊಕದ್ದಮೆಗೆ ಸಂಬಂಧಪಟ್ಟಂತೆ ಸಾಕಷ್ಟು ಕಾಲಾವಕಾಶವನ್ನು ಕೊಟ್ಟಿದ್ದರೂ ಕೂಡ ಮೂಲ ವಾರಸುದಾರರು ಮೂಲ ದಾಖಲಾತಿಗಳೊಂದಿಗೆ ಹಾಜರಾಗಿ ತಾವು ತಪ್ಪಿತಸ್ಥರಲ್ಲ ಎಂದು ಸಾಬೀತುಪಡಿಸಲು ವಿಫಲರಾದ ಕಾರಣ, ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಮುದ್ದೆ ಮಾಲುಗಳನ್ನು ಪರಿಶೀಲಿಸಿ ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ ಹಾಗೂ ಸದರಿ ವಾಹನದ ಮೂಲ ವಾರಸುದಾರರನ್ನು ಪತ್ತೆಹಚ್ಚಲು ಎಲ್ಲಾ ರೀತಿಯಿಂದ ಕ್ರಮಕೈಗೊಂಡಾಗ್ಯೂ ಸಾಧ್ಯವಾಗದೇ ಇರುವುದರಿಂದ ವಾಹನವನ್ನು ಬಹಳಷ್ಟು ದಿವಸ ವಿಲೇವಾರಿ ಮಾಡದೇ ಬಿಟ್ಟಲ್ಲಿ, ವಾತಾವರಣದ ವೈಪರೀತ್ಯದಿಂದಾಗಿ ವಾಹನದ ಬಿಡಿಭಾಗಗಳು ತುಕ್ಕು ಹಿಡಿದು ಅದರ ಮೌಲ್ಯವನ್ನು ಕಳೆದುಕೊಳ್ಳುವುದರಿಂದ ಹಾಗೂ ಇಲಾಖೆಯಲ್ಲಿ ವಾಹನದ ಸುಸ್ಥಿತಿಯನ್ನು ಕಾಪಾಡಲು ಕಷ್ಟ ಸಾಧ್ಯವಾದ್ದರಿಂದ ವಾಹನ ಮಾಲೀಕರಿಗೆ ಮಾಲಿಕತ್ವವನ್ನು ಸಾಬೀತುಪಡಿಸಲು ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ಮುಂದೆ ಬರುವ ಸಾಧ್ಯತೆ ಇಲ್ಲದಿರುವ ಪ್ರಯುಕ್ತ ಅಲ್ಲದೇ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಭಾವಿಸಬಹುದಾಗಿರುತ್ತದೆ. ಅಲ್ಲದೇ ಈ ನ್ಯಾಯಾಲಯಕ್ಕೆ ಒಪ್ಪಿಸಿದ ಪಂಚನಾಮೆಯನ್ನು ಯಾರೂ ಸಹ ಪ್ರಶ್ನಿಸಿಲ್ಲವಾದ್ದರಿಂದ ಇನ್ನು ಕಾಲಾವಕಾಶವನ್ನು ನೀಡುವುದು ಅನಾವಶ್ಯಕವೆಂದು ನಿರ್ಣಯಿಸಿ ಸದರಿ ವಾಹನವನ್ನು ವಿಲೇವಾರಿ ಮಾಡಿ ಸರ್ಕಾರಕ್ಕೆ ಆದಾಯ ತರುವ ಹಿತದೃಷ್ಟಿಯಿಂದ ಹಾಗೂ ದಿನಾಂಕ:24.8.02 ರಂದು ಮಾರುತಿ ಸುಜುಕಿ 800 ಕಾರ್ ನೊಂದಣಿ ಸಂಖ್ಯೆ:ಕೆಎ:15:ಎಂ:1225 ರಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆಯಲ್ಲಿ ತೊಡಗಿದ್ದವು ಎಂಬುದಾಗಿ ದಾಖಲೆಯಿಂದ ರುಜುವಾತಾಗಿರುವುದರಿಂದ ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುವುದರಿಂದ, ಈ ಆದೇಶ.

**ಆದೇಶ**

**ಸಂಖ್ಯೆ:ಎ1:71ಎ:ಅಮೊ:69:02-03, ದಿನಾಂಕ: 26ನೇ ಡಿಸೆಂಬರ್ 2003**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಕೆ. ಲೋಕನಾಥಶೆಟ್ಟಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರಂತೆ ಪ್ರದತ್ತವಾದ ಅಧಿಕಾರದಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಮಾರುತಿ ಸುಜುಕಿ 800 ಕಾರು ನೊಂದಣಿ ಸಂಖ್ಯೆ:ಕೆಎ:15: ಎಂ:1225 ಇಂಜಿನ್ ನಂ. ಐಎನ್.186853, ಛಾಸ್ಸಿ ನಂ. ಎಸ್‌ಬಿ. 308. ಐಎನ್. 141884 ಹಾಗೂ 45 ಕೆಜಿ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ವಾಹನ ಮತ್ತು ಶ್ರೀಗಂಧವನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡುವಂತೆ ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ:26.12.03 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ. ದಿನಾಂಕ:26.12.03 ರಂದು ಬೆರಳಚ್ಚು ಮಾಡಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿದ್ದೇನೆ.

**ಕೆ. ಲೋಕನಾಥಶೆಟ್ಟಿ**
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

ಪಿ.ಆರ್. 52

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿಗಳ ಕಛೇರಿ ನ್ಯಾಯಾಲಯ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ**

**ಉಪಸ್ಥಿತರು:** ಕೆ. ಲೋಕನಾಥ ಶೆಟ್ಟಿ
ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಫಿರ್ಯಾದಿ:** ವನಪಾಲಕ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ.

**ಮಾಲೀಕರು:** ಇಲ್ಲ.

ಪ್ರಸ್ತಾವನೆ:

ದಿನಾಂಕ:14.5.02 ರಂದು ಒಂದು ಅಂಬಾಸಿಡರ್ ಕಾರ್ ನೊಂದಣಿ ಸಂಖ್ಯೆ:ಕೆಎ:03:ಎಂ:3639 ರಲ್ಲಿ ಒಟ್ಟು 61 ಕೆಜಿ ಶ್ರೀಗಂಧವನ್ನು ಯಾವುದೇ ತರಹದ ರಹದಾರಿ ಇಲ್ಲದೇ ರಿಪ್ಪನ್ ಪೇಟೆ ಹೋಗುವ ನವಟೂರು ಗ್ರಾಮದ ಆಕೇಶಿಯ ನೆಡುತೋಪು ಹತ್ತಿರ ಅಕ್ರಮವಾಗಿ ಶ್ರೀಗಂಧವನ್ನು ಸಾಗಿಸುತ್ತಿದ್ದಾಗ ಶಿವಮೊಗ್ಗ ಅರಣ್ಯ ಸಂಚಾರಿ ದಳದ ವನಪಾಲಕರು ಹಾಗೂ ಸಿಬ್ಬಂದಿಯವರು ಪತ್ತೆ ಹಚ್ಚಿ ವಾಹನ ಹಾಗೂ ಶ್ರೀಗಂಧವನ್ನು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಪಂಚನಾಮೆ ಕ್ರಮ ಜರುಗಿಸಿ ವಾಹನ ಹಾಗೂ ಶ್ರೀಗಂಧದ ಬಗ್ಗೆ ಅರಣ್ಯ ಮೊಕದ್ದಮೆ ಸಂಖ್ಯೆ:25:02-03ನ್ನು ದಾಖಲು ಮಾಡಿಕೊಂಡು ವಾಹನ ಅಂಬಾಸಿಡರ್ ಕಾರು ನೊಂದಣಿ ಸಂಖ್ಯೆ:ಕೆಎ:03:ಎಂ:3639 ರ ಇಂಜಿನ್ ನಂ. ಒಇವಿ:19820, ಛಾಸ್ಸಿ ಸಂಖ್ಯೆ:402409 ಎಂದಿರುತ್ತದೆಂದು ತಿಳಿಸುತ್ತಾ, ಪ್ರಕರಣಕ್ಕೆ ಸಂಬಂಧಪಟ್ಟ ಅಸಾಮಿಗಳು ಪತ್ತೆಯಾಗಿರುವುದಿಲ್ಲವೆಂದು ತಿಳಿಸುತ್ತಾ, ಸಂಬಂಧಪಟ್ಟ ದಾಖಲಾತಿಗಳೊಂದಿಗೆ ವಾಹನ ಮತ್ತು ಶ್ರೀಗಂಧವನ್ನು 1963ನೇ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಪ್ರಕಾರ ಮುಂದಿನ ಕ್ರಮ ಕೈಗೊಳ್ಳುವಂತೆ ವನಪಾಲಕ ಅರಣ್ಯ ಸಂಚಾರಿ ದಳ, ಶಿವಮೊಗ್ಗ ಇವರು ಈ ಪ್ರಾಧಿಕಾರಕ್ಕೆ ಹಾಜರ್ ಪಡಿಸಿರುತ್ತಾರೆ. ಅದರಂತೆ ವಾಹನ ಮತ್ತು ಶ್ರೀಗಂಧವನ್ನು ವಲಯ ಅರಣ್ಯಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗರವರ ಸುಪರ್ದಿಗೆ ಸುರಕ್ಷತೆಗಾಗಿ ಮುಂದಿನ ಆದೇಶವಾಗುವವರೆವಿಗೂ ಇಟ್ಟುಕೊಳ್ಳಲು ಆದೇಶಿಸಲಾಗಿತ್ತು.

ಅನಂತರ ಈ ಪ್ರಕರಣಕ್ಕೆ ಸಂಬಂಧಪಟ್ಟಂತೆ, ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ಕುರಿತು 30 ದಿವಸಗಳ ಕಾಲಾವಕಾಶವನ್ನು ನೀಡಿ, ವಾಹನ ಮಾಲೀಕರು:ವಾರಸುದಾರರು ಯಾರಾದರೂ ಇದ್ದರೆ ವಾಹನಕ್ಕೆ ಸಂಬಂಧಪಟ್ಟಂತೆ, ಮೂಲ ದಾಖಲಾತಿಗಳೊಂದಿಗೆ ಹಕ್ಕು ಬಾಧ್ಯತೆಯನ್ನು ಈ ನ್ಯಾಯಾಲಯದ ಮುಂದೆ ಹಾಜರಾಗಿ ತಮ್ಮ ಮಾಲಿಕತ್ವವನ್ನು ರುಜು ವಾತುಪಡಿಸುವುದು. ತಪ್ಪಿದಲ್ಲಿ ವಾಹನ ಮತ್ತು ಶ್ರೀಗಂಧವನ್ನು 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಕುರಿತು ಮುಂದಿನ ಕ್ರಮ ಕೈಗೊಳ್ಳಲಾಗುವುದು ಎಂಬ ಪ್ರಕಟಣೆಯನ್ನು ದಿನಾಂಕ:24.06.02ರ ವಿಜಯ ಕರ್ನಾಟಕ ಹಾಗೂ ದಿನಾಂಕ:04 ಜುಲೈ 2002ರ ಭಾಗ-3 ಪುಟ ಸಂಖ್ಯೆ:1346ರ ಕರ್ನಾಟಕ ರಾಜ್ಯ ಪತ್ರದಲ್ಲಿ ಪ್ರಚಾರ ಪಡಿಸಿ ಪ್ರಕಟಿಸಲಾಗಿದೆ.

ಈ ಮಧ್ಯೆ ಮೊಕದ್ದಮೆಯಲ್ಲಿ ವಶಪಡಿಸಿಕೊಂಡ ವಾಹನದ ಮಾಲೀಕರ ವಿಳಾಸವನ್ನು ಕೋರಿ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು, (ಇಂದಿರಾನಗರ, ಬೆಂಗಳೂರು ರವರಲ್ಲಿ ಪತ್ರವ್ಯವಹರಿಸಿದಾಗ ಸದರಿ ವಾಹನವನ್ನು ಸಿ.ಸಿ.ಯನ್ನು ದಿನಾಂಕ:20-2-02 ರಂದು ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬೆಳಗಾಂ ರವರಲ್ಲಿ ಕಳುಹಿಸಿರುವುದಾಗಿ ತಿಳಿಸಿದನ್ವಯ ಪ್ರಾದೇಶಿಕ ಸಾರಿಗೆ ಅಧಿಕಾರಿಗಳು ಬೆಳಗಾಂ ರವರಲ್ಲಿ ಪತ್ರವ್ಯವಹರಿಸಿ ವಾಹನದ ಬಿ ವರದಿಯನ್ನು ಪಡೆದು ಪರಿಶೀಲಿಸಿದಾಗ, ಬಿ ವರದಿಯಲ್ಲಿ ನಮೂದಿಸಿದ ಇಂಜಿನ್ ಹಾಗೂ ಛಾಸ್ಸಿ ನಂಬರ್‌ಗಳು, ಪ್ರಕರಣದಲ್ಲಿ ವಶಪಡಿಸಿಕೊಂಡ ಇಂಜಿನ್ ಹಾಗೂ ಛಾಸ್ಸಿ ನಂಬರ್‌ಗಳು ತಾಳೆಹೊಂದುತ್ತಿಲ್ಲ. ಆದಾಗ್ಯೂ ಸದರಿ ಬಿ ವರದಿಯಂತೆ ವಾಹನವು ದಿನಾಂಕ:19-12-95 ರಿಂದ ದಿನೇಶ್ ತಿಮ್ಮೆಗೌಡ ಗೌಡರ್, ಬಿ.ಸಿ.164 ಕ್ಯಾಂಪ್ ಬೆಳಗಾಂ ರವರ ಹೆಸರಿನಲ್ಲಿರುತ್ತದೆಂದು ತಿಳಿಸಿದನ್ವಯ, ಈ ಪ್ರಾಧಿಕಾರದಿಂದ ಶ್ರೀ ದಿನೇಶ್, ಬೆಳಗಾಂ ರವರಿಗೆ ಕಾರಣ ಕೇಳುವ ನೋಟೀಸನ್ನು ದಿನಾಂಕ:24-5-03 ಮತ್ತು 23-9-03 ರಂದು ಎರಡು ಬಾರಿ ಕಳುಹಿಸಿದಾಗ್ಯೂ ಜಾರಿಯಾಗದೇ ವಾಪಸ್ಸು ಬಂದಿರುತ್ತದೆ.

ಮುಂದುವರಿದು ಹಾಲಿ ವಾರಸುದಾರರನ್ನು ಪತ್ತೆ ಹಚ್ಚುವ ಬಗ್ಗೆ ಎಷ್ಟೇ ಪ್ರಯತ್ನವನ್ನು ಪಟ್ಟರೂ ಕೂಡ ಹಾಲಿ ವಾರಸುದಾರರು ಪತ್ತೆಯಾಗದೇ ಇರುವುದರಿಂದ ಅಲ್ಲದೇ ಪ್ರಕಟಣೆಯಂತೆ 30 ದಿವಸಗಳೊಳಗಾಗಿ ಯಾವುದೇ ಅಹವಾಲು ಬಾರದಿದ್ದಲ್ಲಿ, 1963ರ ಕರ್ನಾಟಕ ಅರಣ್ಯ ಕಾಯ್ದೆ ಸೆಕ್ಷನ್ 71ಎ ಯಿಂದ ಎಫ್ ವರೆಗಿನ ವಿಧಿಯಂತೆ ಮುಂದಿನ ಕ್ರಮ ಕೈಗೊಳ್ಳಲಾಗುವುದಾಗಿ ಪ್ರಕಟಣೆಯನ್ನು ನೀಡಲಾಗಿತ್ತು. ನಿಗದಿತ ಕಾಲಾವಕಾಶವು ಈಗಾಗಲೇ ಮುಗಿದಿದ್ದು, ಈ ಮೊಕದ್ದಮೆಗೆ ಸಂಬಂಧಪಟ್ಟಂತೆ ಸಾಕಷ್ಟು ಕಾಲಾವಕಾಶವನ್ನು ಕೊಟ್ಟಿದ್ದರೂ ಕೂಡ ಯಾವುದೇ ವ್ಯಕ್ತಿಗಳು ವಾಹನವನ್ನು ಕೋರಿ ಈ ಪ್ರಾಧಿಕಾರದ ಮುಂದೆ ಹಾಜರಾಗಿ ಯಾವುದೇ ಅರ್ಜಿಯನ್ನು ಸಲ್ಲಿಸಿರುವುದಿಲ್ಲದ ಕಾರಣ, ಸಂಬಂಧಪಟ್ಟ ದಾಖಲಾತಿಗಳನ್ನು ಹಾಗೂ ಮುದ್ದೆ ಮಾಲುಗಳನ್ನು ಪರಿಶೀಲಿಸಿ ಶ್ರೀಗಂಧವು ಸರ್ಕಾರದ ಸ್ವತ್ತಾದ ಕಾರಣ, ಹಾಗೂ ಸದರಿ ವಾಹನದ ಮಾಲೀಕರನ್ನು ಪತ್ತೆಹಚ್ಚಲು ಎಲ್ಲ ರೀತಿಯ ಕ್ರಮಕೈಗೊಂಡಾಗ್ಯೂ ಸಾಧ್ಯವಾಗದೇ ಇರುವುದರಿಂದ, ವಾಹನವು ಬಹಳಷ್ಟು ದಿನ ವಿಲೇವಾರಿ ಮಾಡದೇ ಬಿಟ್ಟಲ್ಲಿ ವಾತಾವರಣದ ವೈಪರೀತ್ಯದಿಂದಾಗಿ ವಾಹನದ ಬಿಡಿಭಾಗಗಳು ತುಕ್ಕು ಹಿಡಿದು ಮೌಲ್ಯವನ್ನು ಕಳೆದುಕೊಳ್ಳುವುದರಿಂದ ಹಾಗೂ ಇಲಾಖೆಯಲ್ಲಿ ವಾಹನದ ಸುಸ್ಥಿತಿಯನ್ನು ಕಾಪಾಡಲು ಕಷ್ಟ ಸಾಧ್ಯವಾದ್ದರಿಂದ, ವಾಹನ ಮಾಲೀಕರಿಗೆ ಮಾಲಿಕತ್ವವನ್ನು ಸಾಬೀತುಪಡಿಸಲು ಸಾಕಷ್ಟು ಕಾಲಾವಕಾಶವನ್ನು ನೀಡಿದ್ದರೂ ಮುಂದೆ ಬರುವ ಸಾಧ್ಯತೆ ಇಲ್ಲದಿರುವ ಕಾರಣ, ಅಲ್ಲದೇ ಮಾಲೀಕರು ತನ್ನ ತಿಳುವಳಿಕೆಯಿಂದಲೇ ಹಾಗೂ ಸ್ವತಃ ತಾನೇ ಈ ಕಾನೂನು ಬಾಹಿರ ಕೃತ್ಯವನ್ನು ಎಸಗಿರುತ್ತಾರೆಂದು ಭಾವಿಸಬಹುದಾಗಿರುತ್ತದೆ. ಅಲ್ಲದೇ ದಿನಾಂಕ:14.5.02 ರಂದು ವಾಹನದಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಸಾಗಾಣಿಕೆ ಮಾಡುತ್ತಿದ್ದಾಗ ಫಿರ್ಯಾದಿದಾರರು ಪತ್ತೆ ಹಚ್ಚಿ ಸ್ಥಳ ಮಹಜರ್‌ನೊಂದಿಗೆ ಅಕ್ರಮ ಶ್ರೀಗಂಧವನ್ನು ವಾಹನ ಸಮೇತ ವಶಪಡಿಸಿಕೊಂಡು ಮೊಕದ್ದಮೆಯನ್ನು ದಾಖಲು ಮಾಡಿರುತ್ತಾರೆ. ಸದರಿ ದಾಖಲೆಗಳನ್ನು ಈ ಪ್ರಾಧಿಕಾರಕ್ಕೆ ಸಲ್ಲಿಸಿರುತ್ತಾರೆ. ಈ ನ್ಯಾಯಾಲಯಕ್ಕೆ ಒಪ್ಪಿಸಿದ ಪಂಚನಾಮೆಯನ್ನು ಯಾರೂ ಸಹ ಪ್ರಶ್ನಿಸಿಲ್ಲವಾದ್ದರಿಂದ ಇನ್ನು ಕಾಲಾವಕಾಶ ನೀಡುವುದು ಅನಾವಶ್ಯಕವೆಂದು ನಿರ್ಣಯಿಸಿ ಸದರಿ ವಾಹನವನ್ನು ವಿಲೇವಾರಿ ಮಾಡಿ ಸರ್ಕಾರಕ್ಕೆ ಹೆಚ್ಚಿನ ಆದಾಯ ತರುವ ಹಿತದೃಷ್ಟಿಯಿಂದ ಹಾಗೂ ದಿನಾಂಕ:14.5.02 ರಂದು ಅಂಬಾಸಿಡರ್ ಕಾರು ನೊಂದಣಿ ಸಂಖ್ಯೆ:ಕೆಎ:03:ಎಂ:3639 ರಲ್ಲಿ ಅಕ್ರಮವಾಗಿ ಶ್ರೀಗಂಧವನ್ನು ಕಾನೂನು ಬಾಹಿರವಾಗಿ ಸಾಗಾಣಿಕೆ ಮಾಡುತ್ತಿರುವುದು ಸಂಬಂಧಪಟ್ಟ ದಾಖಲಾತಿಯಿಂದ ದೃಢಪಟ್ಟಿರುವುದರಿಂದ, ಸದರಿ ವಾಹನವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳುವುದು ಯೋಗ್ಯವೆಂದು ಕಂಡು ಬಂದಿರುವುದರಿಂದ, ಈ ಆದೇಶ.

**ಆದೇಶ**

**ಸಂಖ್ಯೆ:ಎ1:71ಎ:ಅಸಂದ:ಅಮೊ:25:02-03, ದಿನಾಂಕ: 27ನೇ ಡಿಸೆಂಬರ್ 2003**

ಮೇಲ್ಕಂಡ ವಿದ್ಯಮಾನಗಳ ಅನುಸಾರವಾಗಿ ಶ್ರೀ ಕೆ. ಲೋಕನಾಥಶೆಟ್ಟಿ, ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ ಆದ ನಾನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71ಎ ರಂತೆ ಪ್ರದತ್ತವಾದ ಅಧಿಕಾರದಂತೆ ಈ ಪ್ರಕರಣದಲ್ಲಿ ವಶಪಡಿಸಿಕೊಂಡ ಅಂಬಾಸಿಡರ್ ಕಾರು ನೊಂದಣಿ ಸಂಖ್ಯೆ:ಕೆಎ:03:ಎಂ:3639 ಇಂಜಿನ್ ನಂ. ಒಇವಿ.19820, ಛಾಸ್ಸಿ ನಂ. 402409 ಹಾಗೂ 61 ಕೆಜಿ ಶ್ರೀಗಂಧವನ್ನು ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಂಡು, ವಾಹನ ಮತ್ತು ಶ್ರೀಗಂಧವನ್ನು ಸರ್ಕಾರಕ್ಕೆ ಅನುಕೂಲಕರ ರೀತಿಯಲ್ಲಿ ವಿಲೇವಾರಿ ಮಾಡುವಂತೆ ಆದೇಶಿಸಿದ್ದೇನೆ. ಸದರಿ ವಾಹನ ಮತ್ತು ಶ್ರೀಗಂಧ ಎಲ್ಲಾ ಋಣಭಾರಗಳಿಂದ ವಿಮುಕ್ತವಾಗಿರುತ್ತದೆ.

ಈ ಆದೇಶವು ಈ ದಿನ ಅಂದರೆ ದಿನಾಂಕ:27.12.03 ರಿಂದ ಸಂಪೂರ್ಣ ಜಾರಿಗೆ ಬರುತ್ತದೆ. ಆದೇಶ ಹೊರಡಿಸಿದ ದಿನಾಂಕದಿಂದ 30 ದಿವಸದೊಳಗೆ ವಾಹನದ ಬಾಧ್ಯತೆದಾರರು ಮೇಲ್ಮನವಿ ಸಲ್ಲಿಸಿ ತಡೆಯಾಜ್ಞೆ ತರದೇ ಇದ್ದರೆ ಇದೇ ಅಂತಿಮ ಆದೇಶವಾಗಿ ಊರ್ಜಿತಗೊಳ್ಳುತ್ತದೆ.

ಈ ಆದೇಶವು ದಿನಾಂಕ:27.12.03 ರಂದು ಬೆರಳಚ್ಚು ಮಾಡಿಸಿ ಈ ನ್ಯಾಯಾಲಯದ ಮೊಹರು ಹಾಕಿ ನನ್ನ ಸಹಿಯೊಂದಿಗೆ ಹೊರಡಿಸಿದ್ದೇನೆ.

**ಕೆ. ಲೋಕನಾಥಶೆಟ್ಟಿ**

ಪಿ.ಆರ್. 53

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,
ಅರಣ್ಯ ಸಂಚಾರಿ ದಳ, ಶಿವಮೊಗ್ಗ ವೃತ್ತ, ಶಿವಮೊಗ್ಗ.

**ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ, ಸಾಗರ ವಿಭಾಗ, ಸಾಗರ ಇವರ ನ್ಯಾಯಾಲಯ, ಸಾಗರ**

**ಅಧಿಸೂಚನೆ**

**ಸಂ.ಅಮೊ.ವಾಹನ.33/98-99, ದಿನಾಂಕ: 8ನೇ ಜನವರಿ 2004**

ಸಾಗರ ವಿಭಾಗದ ವ್ಯಾಪ್ತಿಯಲ್ಲಿ ಶ್ರೀಗಂಧದ ಹಾಗೂ ಇತರೆ ಅರಣ್ಯ ಉತ್ಪನ್ನಗಳ ಕಳ್ಳ ಸಾಗಾಣಿಕೆಯಲ್ಲಿ ತೊಡಗಿದ್ದ ವಾಹನಗಳನ್ನು ಸಾಗರ ವಿಭಾಗದ ಇಲಾಖಾ ಸಿಬ್ಬಂದಿ ವರ್ಗದವರು ಸರ್ಕಾರದ ಪರ ಅಮಾನತ್ತುಪಡಿಸಿಕೊಂಡು ಸದರಿ ವಾಹನಗಳನ್ನು ಕರ್ನಾಟಕ ಅರಣ್ಯ ಕಾಯಿದೆ 1963ರ ಸೆಕ್ಷನ್ 71(ಎ) ಪ್ರಕಾರ ಕ್ರಮ ಜರುಗಿಸುವಂತೆ ಈ ನ್ಯಾಯಾಲಯಕ್ಕೆ ಹಾಜರುಪಡಿಸಲಾದ ವಾಹನಗಳ ತಪಶೀಲು ಈ ಕೆಳಕಂಡಂತಿರುತ್ತದೆ.

| ಕ್ರ. ಸಂ. | ವಾಹನದ ವಿವರ | ಅರಣ್ಯ ಮೊಕದ್ದಮೆ ಸಂಖ್ಯೆ | ಯಂತ್ರದ ಸಂಖ್ಯೆ | ಛಾಸೀಸ್ ಸಂಖ್ಯೆ |
|---|---|---|---|---|
| 1 | Tempo CRQ-7581 | 22/2003-04 | 616969036137 | 616FD707228 |
| 2 | Bajaj M-80 KA-15-E-2624 | 23/2003-04 | 16E93D19979 | 16C93020168 |
| 3 | Hero Honda KA-14-2-2344 | 24/2003-04 | 00G18M11971 | 00G20C13080 |
| 4 | Fiber Boat | 28/2003-04 | ಕಾರ್ಗಲ್ ವಲಯ ಅರಣ್ಯಾಧಿಕಾರಿಯವರು ಜಪ್ತಿ ಮಾಡಿ ಅ.ಮೊ. ಸಂಖ್ಯೆ 18/03-04 ದಾಖಲಿಸಿರುತ್ತಾರೆ. ಅದರಲ್ಲಿ ಅಕ್ರಮವಾಗಿ ಕಾಡುಜಾತಿ ನಾಟಾ ಸೈಜು 78=2.395ಎಂ3 ದಾಸ್ತಾನಿತ್ತು. | |
| 5 | Bajaj Scooter CTQ-965 | 25/2003-04 | 10E069299 | Not Available |
| 6 | Maruthi Car GA-01-2793 | 27/2003-04 | SB308IN0396648 | F8B-IN-5572 |
| 7 | Hero Honda KA-19-H-8411 | 26/2003-04 | 96A 17E03828 | 96A 19F43634 |

ಈ ಮೇಲ್ಕಂಡ ವಾಹನದ ಬಗ್ಗೆ ಯಾರೂ ವಾರಸುದಾರರು ಇಲ್ಲಿಯವರೆಗೆ ಹಾಜರಾಗದೇ ಇರುವುದರಿಂದ ಸದರಿ ವಾಹನಗಳ ನಿಜವಾದ ವಾರಸುದಾರರು ಯಾರಾದರೂ ಇದ್ದಲ್ಲಿ ಅವರು ವಾಹನಗಳ ಬಗ್ಗೆ ಅಧಿಕೃತ ಹಕ್ಕುಬಾಧ್ಯತೆಗಳನ್ನು ಕೆಳಸಹಿ ಮಾಡಿರುವವರ ಸಮ್ಮುಖದಲ್ಲಿ ಈ ಅಧಿಸೂಚನೆಯು ಕರ್ನಾಟಕ ಸರ್ಕಾರದ ಗೆಜೆಟ್‌ನಲ್ಲಿ ಪ್ರಕಟವಾದ ದಿನಾಂಕದಿಂದ ಮೂವತ್ತು (30) ದಿನಗಳ ಒಳಗೆ ಹಾಜರುಪಡಿಸಬೇಕಾಗಿ ಮತ್ತು ವಾಹನವನ್ನು ಶ್ರೀಗಂಧ ಮತ್ತು ಇತರೇ ಅರಣ್ಯ ಉತ್ಪನ್ನವನ್ನು ಕಳ್ಳಸಾಗಾಣಿಕೆ ಮಾಡಲು ಉಪಯೋಗಿಸಿದ್ದಕ್ಕಾಗಿ ವಾಹನಗಳನ್ನು ಏಕೆ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಬಾರದು ಎಂಬುದರ ಬಗ್ಗೆ ಅವರುಗಳ ಅಧಿಕೃತ ಸಮಜಾಯಿಷಿಯನ್ನು ಬರಹದ ಮೂಲಕ ಇತರೆ ದಾಖಲಾತಿಗಳೊಂದಿಗೆ ಈ ಕೆಳಗೆ ಸಹಿ ಮಾಡಿದವರ ಸಮ್ಮುಖದಲ್ಲಿ ಹಾಜರುಪಡಿಸಲು ಈ ಮೂಲಕ ಪ್ರಕಟಿಸಲಾಗಿದೆ. ಈ ಮೇಲ್ಕಂಡ ವಾಹನದ ಬಗ್ಗೆ ಯಾವ ವಾರಸುದಾರರು ಮೇಲ್ಕಾಣಿಸಿದ ಅವಧಿಯೊಳಗೆ ಲಿಖಿತ ಮೂಲಕ ಯಾವುದೇ ಅರ್ಜಿಯನ್ನು ಈ ಕೆಳಸಹಿದಾರರಿಗೆ ಸಲ್ಲಿಸದೇ ಇದ್ದಲ್ಲಿ ವಾಹನವನ್ನು ಕರ್ನಾಟಕ ಅರಣ್ಯ ಕಾಯ್ದೆ 1963ರ ಸೆಕ್ಷನ್ 71(ಎ) ಎರಡನೇ ತಿದ್ದುಪಡಿ ಪ್ರಕಾರ ಸರ್ಕಾರಕ್ಕೆ ಮುಟ್ಟುಗೋಲು ಹಾಕಿಕೊಳ್ಳಲಾಗುವುದು.

ಅಧಿಕೃತ ಅಧಿಕಾರಿ ಹಾಗೂ ಉಪ ಅರಣ್ಯ ಸಂರಕ್ಷಣಾಧಿಕಾರಿ,

ಪಿ.ಆರ್. 63

ಸಾಗರ ವಿಭಾಗ, ಸಾಗರ.